# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 478 |
| ಸದಸ್ಯರ ಹೆಸರು | : | ಶ್ರೀ ಕೆ.ಎ.ತಿಪ್ಪೇಸ್ವಾಮಿ |
| ಉತ್ತರಿಸಬೇಕಾದ ದಿನಾಂಕ | : | 21-02-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ವಿದ್ಯುಚ್ಛಕ್ತಿ ವಿತರಣಾ ಕಂಪನಿಗಳು ಕಳೆದ ಮೂರು ವರ್ಷಗಳಿಂದ ಸತತವಾಗಿ ನಷ್ಟ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ವರ್ಷವಾರು-ಕಂಪನಿವಾರು ಪೂರ್ಣ ಮಾಹಿತಿ ನೀಡುವುದು; | ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಕಳೆದ 3 ವರ್ಷಗಳ ಲಾಭ/ನಷ್ಟದ ವಿವರಗಳು ಈ ಕೆಳಕಂಡಂತಿರುತ್ತದೆ. (ರೂ. ಕೋಟಿಗಳಲ್ಲಿ) (see table below) |

**(ರೂ. ಕೋಟಿಗಳಲ್ಲಿ)**

| ಕಂಪನಿ ಹೆಸರು | ಲಾಭ/ನಷ್ಟ | | |
|---|---|---|---|
| | **2018-19** | **2019-20** | **2020-21** |
| ಬೆಸ್ಕಾಂ | 84.77 | 146.51 | 208.25 |
| ಮೆಸ್ಕಾಂ | 56.39 | 43.57 | -52.97 |
| ಸೆಸ್ಕ್ | -209.35 | -366.63 | -723.19 |
| ಹೆಸ್ಕಾಂ | 689.99 | -682.21 | -2490.26 |
| ಜೆಸ್ಕಾಂ | 319.77 | -987.58 | -1065.79 (Prov) |

| | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯ ಸರ್ಕಾರ ಕೇಂದ್ರ ಸರ್ಕಾರದ ನೆರವಿನೊಂದಿಗೆ ಈ ವಿದ್ಯುಚ್ಛಕ್ತಿ ವಿತರಣಾ ಕೇಂದ್ರಗಳ ನಷ್ಟವನ್ನು ತಗ್ಗಿಸಲು ಕೈಗೊಂಡಿರುವ ಕ್ರಮಗಳೇನು; ಈ ಬಗ್ಗೆ ಕೇಂದ್ರ ಸರ್ಕಾರದ ಯಾವ ಯೋಜನೆ ಅಡಿ ಆರ್ಥಿಕ ಮತ್ತು ಸುಧಾರಣೆ ಬೆಂಬಲ ದೊರೆಯುತ್ತಿದೆ; (ಕಳೆದ 3 ವರ್ಷಗಳಲ್ಲಿ ಆರ್ಥಿಕ ನೆರವಿನೊಂದಿಗೆ ದೊರೆತಿರುವ ಬೆಂಬಲದ ಪೂರ್ಣ ಮಾಹಿತಿ ನೀಡುವುದು) | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಕೇಂದ್ರ ಸರ್ಕಾರದ ನೆರವಿನೊಂದಿಗೆ ನಷ್ಟವನ್ನು ತಗ್ಗಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ.<br>1. ದೀನದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆ<br>2. ಸಮಗ್ರ ವಿದ್ಯುತ್ ಅಭಿವೃದ್ಧಿ ಯೋಜನೆ<br>3. ಸೌಭಾಗ್ಯ ಯೋಜನೆ<br>**ದೀನ ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆ (ಡಿ.ಡಿ.ಯು.ಜಿ.ಜೆ.ವೈ):**<br>ಸದರಿ ಯೋಜನೆಯು ಕೇಂದ್ರ ಸರ್ಕಾರದ ಗ್ರಾಮೀಣ ವಿದ್ಯುದೀಕರಣ ಯೋಜನೆಯಾಗಿರುತ್ತದೆ.<br>ಈ ಯೋಜನೆಯಲ್ಲಿ ಕೈಗೊಂಡಿರುವ ಕಾಮಗಾರಿಗಳು, ವಿದ್ಯುತ್ ವಿತರಣಾ ವ್ಯವಸ್ಥೆಯನ್ನು ಬಲಪಡಿಸುವುದು ಮತ್ತು ಹೆಚ್.ಟಿ/ಎಲ್.ಟಿ ಮಾರ್ಗಗಳನ್ನು ನಿರ್ಮಿಸಿ, ಪರಿವರ್ತಕಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕವಿಲ್ಲದ ಬಡತನ ರೇಖೆಗಿಂತ ಕೆಳಗಿರುವ ಮನೆಗಳಿಗೆ ಉಚಿತವಾಗಿ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗಿರುತ್ತದೆ |
| ಇ) | ಕೇಂದ್ರ ಸರ್ಕಾರವು ರಾಜ್ಯಗಳಲ್ಲಿನ ವಿದ್ಯುಚ್ಛಕ್ತಿ ವಿತರಣಾ ಕಂಪನಿಗಳಿಗೆ ಆರ್ಥಿಕ ನೆರವು ನೀಡಲು ರೂಪಿಸಿರುವ ಯೋಜನೆಗಳು ಕೇವಲ ಕಂಪನಿಗಳಲ್ಲಿ ಸುಧಾರಣೆ ತರುವ ನಿಟ್ಟಿನಲ್ಲಿ ಆರ್ಥಿಕ ರೂಪದಲ್ಲಿ ಸಾಲವನ್ನು ಒದಗಿಸುವ ಬಗ್ಗೆ ಸೀಮಿತವಾಗಿರುವುದು ನಿಜವೇ; ಹಾಗಿದ್ದಲ್ಲಿ, ಕೇಂದ್ರ ಸರ್ಕಾರ ನಿಗದಿ ಪಡಿಸಿರುವ ಅಂತಹ ಯೋಜನೆಗಳು ಯಾವುವು? (ಪೂರ್ಣ ಮಾಹಿತಿ ನೀಡುವುದು) | |

| | | |
|---|---|---|
| | | **ಸಮಗ್ರ ವಿದ್ಯುತ್ ಅಭಿವೃದ್ಧಿ ಯೋಜನೆ (ಐ.ಪಿ.ಡಿ.ಎಸ್)**<br>ಸದರಿ ಯೋಜನೆಯು ಕೇಂದ್ರ ಸರ್ಕಾರದ ನಗರ ಪ್ರದೇಶದ ವಿದ್ಯುತ್ ಗ್ರಾಹಕರಿಗೆ ಉತ್ತಮ ಗುಣಮಟ್ಟದ ವಿದ್ಯುತ್ ಸರಬರಾಜು ಕಲ್ಪಿಸಲು, ವಿದ್ಯುತ್ ವಿತರಣಾ ಕಾರ್ಯಜಾಲವನ್ನು ಬಲಪಡಿಸುವ ಯೋಜನೆಯಾಗಿರುತ್ತದೆ.<br>ಈ ಯೋಜನೆಯಲ್ಲಿ ಕೈಗೊಂಡಿರುವ ಕಾಮಗಾರಿಗಳು -ವಿದ್ಯುತ್ ವಿತರಣಾ ವ್ಯವಸ್ಥೆಯನ್ನು ಬಲಪಡಿಸುವುದು ಮತ್ತು ಹೆಚ್.ಟಿ/ಎಲ್.ಟಿ ಮಾರ್ಗಗಳನ್ನು ನಿರ್ಮಿಸಿ, ಪರಿವರ್ತಕಗಳನ್ನು ಅಳವಡಿಸಲಾಗಿರುತ್ತದೆ.<br>**ಸೌಭಾಗ್ಯ ಯೋಜನೆ:**<br>ಸದರಿ ಯೋಜನೆಯು ಕೇಂದ್ರ ಸರ್ಕಾರದ ಗ್ರಾಮೀಣ ವಿದ್ಯುದ್ದೀಕರಣ ಯೋಜನೆಯಾಗಿರುತ್ತದೆ.<br>ಈ ಯೋಜನೆಯಲ್ಲಿ ಕೈಗೊಂಡಿರುವ ಕಾಮಗಾರಿಗಳು, ವಿದ್ಯುತ್ ವಿತರಣಾ ವ್ಯವಸ್ಥೆಯನ್ನು ಬಲಪಡಿಸುವುದು ಮತ್ತು ಹೆಚ್.ಟಿ. / ಎಲ್.ಟಿ. ಮಾರ್ಗಗಳನ್ನು ನಿರ್ಮಿಸಿ ಪರಿವರ್ತಕಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕವಿಲ್ಲದ ಬಡತನ ರೇಖೆಗಿಂತ ಕೆಳಗಿರುವ ಮನೆಗಳಿಗೆ ಉಚಿತವಾಗಿ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗಿರುತ್ತದೆ.<br>ಕಳೆದ 03 ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ದೊರೆತಿರುವ ಆರ್ಥಿಕ ನೆರವು (ಅನುದಾನದ ರೂಪದಲ್ಲಿ) ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಸಂಖ್ಯೆ: ಎನರ್ಜಿ 19 ಇಬಿಪಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು

## ಅನುಬಂಧ

**ಕೇಂದ್ರ ಸರ್ಕಾರದಿಂದ ಕಳೆದ 3 ವರ್ಷಗಳಲ್ಲಿ ದೊರೆತಿರುವ ಆರ್ಥಿಕ ನೆರವು (ಅನುದಾನದ ರೂಪದಲ್ಲಿ) ಕೆಳಕಂಡಂತಿದೆ:**

**(ರೂ.ಕೋಟಿಗಳಲ್ಲಿ)**

| ಕಂಪನಿ ಹೆಸರು | ದೀನದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆ | | | | ಸಮಗ್ರ ವಿದ್ಯುತ್ ಅಭಿವೃದ್ಧಿ ಯೋಜನೆ | | | | ಸೌಭಾಗ್ಯ ಯೋಜನೆ | | | |
|---|---|---|---|---|---|---|---|---|---|---|---|---|
| | 2018-19 | 2019-20 | 2020-21 | 2021-22 | 2018-19 | 2019-20 | 2020-21 | 2021-22 | 2018-19 | 2019-20 | 2020-21 | 2021-22 |
| ಬೆಸ್ಕಾಂ | 61.91 | 25.05 | - | 14.58 | 166.74 | - | - | 15.59 | ಸೌಭಾಗ್ಯ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ. | | | |
| ಮೆಸ್ಕಾಂ | 113.98 | 32.88 | - | - | 57.28 | 2.52 | 9.99 | 24.35 | - | 8.25 | - | - |
| ಸೆಸ್ಕ್ | 78.55 | 21.15 | - | 22.02 | 29.26 | 29.77 | - | 19.04 | - | 6.71 | - | 0.15 |
| ಹೆಸ್ಕಾಂ | 96.34 | 31.36 | - | 20.15 | 55.95 | 10.37 | 15.43 | 6.68 | - | 45.65 | - | - |
| ಜೆಸ್ಕಾಂ | 134.83 | 51.91 | - | 37.50 | 39.44 | 6.45 | 24.46 | 0.41 | - | 43.42 | - | - |